# ಕರ್ನಾಟಕ ವಿಧಾನ ಪರಿಷತ್

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 250 |
| ಸದಸ್ಯರ ಹೆಸರು | : | ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 22.09.2020 |
| ಉತ್ತರಿಸಬೇಕಾದ ಸಚಿವರು | : | ನಗರಾಭಿವೃದ್ಧಿ ಸಚಿವರು |

| | ಪ್ರಶ್ನೆ | ಉತ್ತರ |
|---|---|---|
| ಅ) | ಹುಬ್ಬಳ್ಳಿ ಧಾರವಾಡ ಮಹಾನಗರಪಾಲಿಕೆಯ ವ್ಯಾಪ್ತಿಯ ಉಣಕಲ್ಲ ಗ್ರಾಮದ ರಿ.ಸ ನಂ 53 ಅ.ಸಿಟಿ ಸರ್ವೆ ನಂ.3121 ಕ್ಷೇತ್ರ 4.38 ಎಕರೆ ಜಮೀನನ ಆಸ್ತಿ ಪ್ರಕಟಣಾ ಪತ್ರಿಕೆಯಲ್ಲಿ ಅತಿಕ್ರಮಣವಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದರೆ ಇಲ್ಲಿಯವರೆವಿಗೂ ಕ್ರಮಕೈಗೊಳ್ಳದಿರಲು ಕಾರಣವೇನು; ರಿ.ಸ.ನಂ.53/ಅ, ಸಿ.ಟಿ ಸರ್ವೆ ನಂ.3121 ಇದ್ದದ್ದನ್ನು ಸಿಟಿ ಸರ್ವೆ ನಂ 3116 ಹಾಗೂ ಕ್ಷೇತ್ರವನ್ನು ಆಸ್ತಿ ಪ್ರಕಟಣಾ ಪತ್ರದಲ್ಲಿ ಬದಲಾವಣೆ ಮಾಡಿದ್ದು ನಿಜವೇ; ನಿಜವಿದ್ದರೆ ಕಾರಣವೇನು; (ಸಂಪೂರ್ಣ ಮಾಹಿತಿ ನೀಡುವುದು) | ಉಣಕಲ್ಲ ಗ್ರಾಮದ ರಿ.ಸ.ನಂ.53 ಅ ಸಿಟಿ ಸರ್ವೇ ನಂ. 3121 ಕ್ಷೇತ್ರ 4.38 ಎಕರೆ ಜಮೀನು ಅತಿಕ್ರಮಣ ಕುರಿತು ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯಿಂದ ದಿ:03.08.2020 ರಂದು ಉಪ ನಿರ್ದೇಶಕರು, ಭೂದಾಖಲೆಗಳು ಧಾರವಾಡ ಇವರಿಗೆ ಪತ್ರ ಬರೆದು ಸದರಿ ಆಸ್ತಿಯನ್ನು ಹದ್ದುಬಸ್ತು ಅಳತೆ ಮಾಡಿ ಗುರುತಿಸಿ ಕೊಡಲು ತಿಳಿಸಲಾಗಿದ್ದು, ಈ ಕಾರ್ಯವು ಪ್ರಗತಿಯಲ್ಲಿರುತ್ತದೆ. ಸರ್ವೆ ಕಾರ್ಯ ಪೂರ್ಣಗೊಂಡ ನಂತರ ಅತಿಕ್ರಮಣ ಹೊಂದಿರುವುದು ಕಂಡು ಬಂದಲ್ಲಿ ತೆರವುಗೊಳಿಸಲು ಕ್ರಮ ಕೈಗೊಳ್ಳಲಾಗುವುದು.<br>ರಿ.ಸ.ನಂ.53/ಅ, ಸಿಟಿ ಸರ್ವೇ ನಂ. 3121 ಇದ್ದದ್ದನ್ನು ಸಿಟಿ ಸರ್ವೇ ನಂ. 3116 ಹಾಗೂ ಕ್ಷೇತ್ರವನ್ನು ಆಸ್ತಿ ಪ್ರಕಟಣಾ ಪತ್ರದಲ್ಲಿ ಸಿಟಿ ಸರ್ವೆ ಕಛೇರಿ ಹುಬ್ಬಳ್ಳಿ ಇವರಲ್ಲಿ ಬದಲಾವಣೆ ಆಗಿರುತ್ತದೆ, ಆದರೆ ಹುಬ್ಬಳ್ಳಿ-ಧಾರವಾಡ ಮಹಾನಗರಪಾಲಿಕೆಯಿಂದ ಯಾವುದೇ ಬದಲಾವಣೆ ಆಗಿರುವುದಿಲ್ಲ. |
| ಆ) | ಜಮೀನು ಅತಿಕ್ರಮಣ ಮಾಡಿದ ಪ್ರಕರಣಕ್ಕೆ ಸಂಬಂಧಿಸಿದಂತೆ ಅದರಲ್ಲಿ ಶಾಮೀಲಾದ ಅಧಿಕಾರಿಗಳು ಯಾರು ಯಾರು, ಅವರ ಹೆಸರು ಮತ್ತು ಹುದ್ದೆ ವಿವರ, ಅವರ ಮೇಲೆ ಸರ್ಕಾರ ಏನು ಕ್ರಮ ಕೈಗೊಂಡಿದೆ; ಅಂತಹ ಅಧಿಕಾರಿಗಳ ಮೇಲೆ ಕ್ರಮ ಕೈಗೊಳ್ಳುವಲ್ಲಿ ವಿಳಂಬ ಧೋರಣೆ ತೋರಿ ಸರ್ಕಾರ ಭೂಗಳ್ಳರಿಗೆ ಸಹಾಯ ಮಾಡುತ್ತಿರುವುದು ನಿಜವೇ; ಈಗಾಲಾದರೂ ಸರ್ಕಾರ ಈ ಬಗ್ಗೆ ಗಮನ ಹರಿಸಿ ತನಿಖೆ ನಡೆಸಿ ತಪ್ಪಿತಸ್ಥರ ಮೇಲೆ ಶಿಸ್ತು ಕ್ರಮ ಜರುಗಿಸುವುದೇ; | ಜಂಟಿ ನಿರ್ದೇಶಕರ ಕಛೇರಿ ದಕ್ಷಿಣ ವಲಯ ಕೆ.ಆರ್ ವೃತ್ತ, ಭೂಮಾಪನ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಸಿಟಿಎಎಸ್‌ತಾಂ(1)16/2020-21 ದಿ: 24.08.2020ರ ಪ್ರಕಾರ ಸದರಿ ಪ್ರಕರಣ ಕುರಿತು ತನಿಖೆ ನಡೆಯುತ್ತಿದ್ದು, ತನಿಖಾ ವರದಿ ಬಂದ ನಂತರ ಅದರಲ್ಲಿ ಶಾಮೀಲಾದ ಅಧಿಕಾರಿಗಳ ವಿರುದ್ಧ ಶಿಸ್ತು ಕ್ರಮ ವಹಿಸಲಾಗುವುದು. |

| | | |
|---|---|---|
| ಇ) | ಸದರಿ ಜಮೀನನ್ನು ಮಹಾನಗರಪಾಲಿಕೆ ಸ್ವಾಧೀನಪಡಿಸಿಕೊಂಡಿದೆಯೇ; ಸ್ವಾಧೀನಪಡಿಸಿಕೊಂಡಿದ್ದರೆ ಅದರ ಆದೇಶ ಸಂಖ್ಯೆ ಮತ್ತು ದಿನಾಂಕ ಒದಗಿಸುವುದು ಇಲ್ಲದಿದ್ದರೆ ಸರ್ಕಾರ ತಕ್ಷಣ ಕ್ರಮ ಕೈಗೊಳ್ಳುವುದೇ? | ಸದರಿ ಜಮೀನನ್ನು ಮಹಾನಗರ ಪಾಲಿಕೆಯು ಮಾನ್ಯ ವಿಶೇಷ ಭೂಸ್ವಾಧೀನ ಅಧಿಕಾರಿಗಳು, ಧಾರವಾಡ ಇವರ ಆದೇಶ ನಂ. LAQ-SR-342, ದಿನಾಂಕ: 03-05-1963 ರ ಪ್ರಕಾರ ಭೂಸ್ವಾಧೀನಪಡಿಸಿ ಕೊಂಡಿರುತ್ತದೆ. |

ಕಡತ ಸಂಖ್ಯೆ: ನಅಇ 39 ಎಹೆಚ್‌ಡಿ 2020(ಇ)

(ಬಿ.ಎ. ಬಸವರಾಜ)
ನಗರಾಭಿವೃದ್ಧಿ ಸಚಿವರು